# ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್.

"MUNJAVU" Kannada Weekly, KOPPA - CHM. ಫೋನ್ : 114
…ನೇ ವರ್ಷ 13ನೇ ಸಂಚಿಕೆ ಕೊಪ್ಪ 22-11-1989 ಭಾನುವಾರ ಬೆಲೆ 50 ಪೈಸೆ


## ನ.ರಾ. ಪುರದಲ್ಲಿ ಗ್ರಂಥಾಲಯ ಸಪ್ತಾಹ

ನ. ರಾ. ಪುರ : ರಾಷ್ಟ್ರೀಯ ಗ್ರಂಥಾಲಯ ಸಪ್ತಾಹದ ಅಂಗವಾಗಿ ಕೃಷ್ಣರಾಜೇಂದ್ರ ಜಿಲ್ಲಾ ಕೇಂದ್ರ ಗ್ರಂಥಾಲಯದ ನರಸಿಂಹರಾಜಪುರ ಶಾಖೆಯಲ್ಲಿ ನ. 14 ರಿಂದ 20 ನೇ ನವೆಂಬರ್‌ವರೆಗೆ ಹೊಸ ಪುಸ್ತಕಗಳ ಪ್ರದರ್ಶನ ನಡೆಯಿತು.

ಗ್ರಂಥಾಲಯಗಳ ಪೂರ್ಣ ಪ್ರಯೋಜನ ಸಾರ್ವಜನಿಕರಿಗೆ, ಅದರಲ್ಲೂ ವಿಶೇಷವಾಗಿ ಯುವ ಜನರು ಮತ್ತು ಮಕ್ಕಳಿಗೆ ದೊರೆಯಬೇಕೆಂಬ ಆಶಯದಿಂದ ಸಪ್ತಾಹದಲ್ಲಿ ಹೊಸ ಸದಸ್ಯತ್ವವನ್ನು ಸ್ವೀಕರಿಸುವ ಆಂದೋಲನವನ್ನೂ ಹಮ್ಮಿಕೊಳ್ಳಲಾಗಿತ್ತು. ಆದರೆ, ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಏರ್ಪಡಿಸಲು ಉದ್ದೇಶಿಸಿದ್ದ ವಿವಿಧ ಸ್ಪರ್ಧೆಗಳು ಚುನಾವಣೆಯ ಕಾರಣ ನಡೆಯಲಿಲ್ಲ.

(ವರದಿ: ನವಿಲೂರ್ ಪ್ರಕಾಶ್)

### ಅಬ್ಬರದ ಪ್ರಚಾರ, ಹಣದ ಹೊಳೆ, ಅಗ್ರ ನಾಯಕರಿಂದ ಮತ ಯಾಚನೆ :

# ಗೆಲುವಿಗಾಗಿ ದಳ, ಕಾಂಗ್ರೆಸ್, ಜನತಾ ತೀವ್ರ ಪೈಪೋಟಿ

## ಕೊಪ್ಪ : ಯಾರು ಗೆಲ್ಲಬಹುದು? ಯಾರಿಗೆ ಮೇಲುಗೈ?— ಎಲ್ಲಿ ಹೋದರೂ ಕುತೂಹಲದ, ಆತಂಕದ ಇದೇ ಪ್ರಶ್ನೆ, ಇದೇ ತಪಾಸಣೆ.

**ಅಷ್ಟೇ ಸಹಜವಾಗಿ ಎಲ್ಲ ಕಡೆಯೂ ಎಲ್ಲರದೂ ಒಂದೇ ಉತ್ತರ— "ಏನೋಪ್ಪ ಹೀಗೇ ಅಂತ ಹೇಳೋಕ್ಕಾಗಲ್ಲ ಎಲ್ಲ ಸಮ ಸಮ ಕಾಣ್ತಾನೆ."**

**ಇದಕ್ಕಿಂತ ಹೆಚ್ಚಿಗೆ ವಿಷಯ ತಿಳಿಯಬೇಕೆಂದರೆ ಕೆದಕಬೇಕು, ಸುತ್ತೀ ಬಳಸಿ ಕೇಳಬೇಕು; ಬರುವ ಜವಾಬಿನಲ್ಲಿ ಮಾಹಿತಿಯ ಒಳಅಂತರಕ್ಕಾಗಿ ಕಿವಿಗೊಡಬೇಕು... ....**

…ಚುನಾವಣೆಯ ಘಳಿಗೆ ಸಮೀಪಿಸಿದಂತೆ …ಲ್ಲ ಪ್ರಮುಖ ಪಕ್ಷಗಳಲ್ಲೂ ಚುನಾವಣೆಯ …ರ ತೀವ್ರವಾಗುತ್ತಿದೆ. ಗೆಲ್ಲಲೇಬೇಕೆಂಬ …ದಲ್ಲಿ ತಮ್ಮೆಲ್ಲ ವಿಶಿಷ್ಟ ತಂತ್ರಗಳನ್ನೂ …ಸುತ್ತಿವೆ.

…ಪ್ರಚಾರದ ಅಬ್ಬರವಂತೂ ಮುಗಿಲು …ಟ್ಟುತ್ತಿದೆ ಇದರ ನಡುವೆ ಬಹುತೇಕ …ಪ್ರಮುಖ ಅಭ್ಯರ್ಥಿಗಳೂ ಮನೆಮನೆಗೆ …ಗಿ ಮತ ಯಾಚನೆ ನಡೆಸಿದ್ದಾರೆ. ಇದ… ಅವರವರ ಮಹಿಳಾ ತಂಡಗಳೂ ವ್ಯೈ… ಬಿಟ್ಟು ಬೀದಿಗಿಳಿದಿವೆ.

…ಮತದಾರರಂತೂ ರಂಗೋಲಿ ಕೆಳಗೆ …ರುವ ಚಾಣಾಕ್ಷರಾಗಿದ್ದಾರೆ. ಯಾರು …ದರೆ ಅವರಿಗೆ ಸರಿಯಾಗಿ ಉತ್ತರಿಸು…ರೆ. ಅದೂ, ಅತ್ಯಂತ 'ಆತ್ಮೀಯತೆ…ಂದ' ಹೀಗಾಗಿ ಎಲ್ಲ ಪಕ್ಷದವರಿಗೂ …ತ್ತ ತಮ್ಮ ಗೆಲುವು ಖಂಡಿತವೆಂಬ ಭಾ…!

…ಾಂಗ್ರೆಸ್‌ನ ಯು ಕೆ. ಶಾಮಣ್ಣನವರಿಗೆ …ಶಃ ಇದು ಕೊಟ್ಟ ಕೊನೆಯ ಅವ… ರಾಜಕೀಯದಲ್ಲಿ ಅವರು ಸ್ವಸ್ತಿತ… ಉಳಿಯಬೇಕಿದ್ದರೆ ಈ ಬಾರಿ ಅವರು …ಲೇಬೇಕು. ಅದಕ್ಕಾಗಿ ಅವರು ಮಾಡದೇ …ಯತ್ನವೇ ಇಲ್ಲ

…ದರೆ ಅವರ ಆಗಭ ಶ್ರೀವಂತಿಕೆಯೇ… ಅವರಿಗೆ ದೊಡ್ಡ ತೊಡಕಾಗಿ ಕಾ…ದೆ ಬೇಗಾನೆ ರಾಮಯ್ಯನೋ ಇನ್ಯಾ… ಅಭ್ಯರ್ಥಿಯಾಗಿರುತ್ತಿದ್ದರೆ ತಮ್ಮ… ಅಷ್ಟು ಮಟ್ಟಿಗೆ ಹಗುರಾಗುತ್ತಿತ್ತು …ತ್ತಾರೆ ಕಾಂಗ್ರೆಸ್ ಕಾರ್ಯಕರ್ತರು. …ವರ ಬಗೆಗೂ ಅನುಕಂಪ ಇಲ್ಲದೇ ಇಲ್ಲ. "ಪಾಪ, ಕಳೆದ ಸಲವೂ ನಿಂತು ಸೋತ ಮನುಷ್ಯ ಕಂಡ್ರಿ" ಎಂದವರ ಧ್ವನಿಯಲ್ಲೇ ಅವರ ಒಲವು ಯಾರಿಗೆಂದು ಸ್ಪಷ್ಟ. ಇನ್ನು ಕಾಂಗ್ರೆಸ್‌ನ ಖಾಯಂ ಮತದಾರರ ಶ್ರೀರಕ್ಷೆಯಂತೂ ಇದ್ದೇ ಇದೆ.

ಗೋವಿಂದ ಗೌಡರಿಗೂ ಇದು ಕೊನೇ ಹೋರಾಟ. ಎರಡು ಬಾರಿ ಗೆದ್ದು, ಕ್ಯಾಬಿನೆಟ್ ದರ್ಜೆವರೆಗೂ ಏರಿ, ಗೌರವವಾಗಿ ಹಾಯಾಗಿ ಮನೆ ಸೇರಬೇಕೆಂದಿದ್ದವರನ್ನು ಪರಿಸ್ಥಿತಿಯ ಒತ್ತಡ ಬೀದಿಗಿಳಿಸಿದೆ.

"ಈ ವಯಸ್ಸಿನಲ್ಲಿ ಅವರು ಸೋತು ಮನೆ ಸೇರುವುದನ್ನು ನಾನು ನೋಡಲಾರೆ" ಎಂದು ಅವರ ಮಗ ವೆಂಕಟೇಶ್ ಹೇಳುವಾಗ, ಅವರ ಶತಪ್ರಯತ್ನಗಳ ಆಳ ಅರಿವಾಗುತ್ತದೆ. ಗೌಡರ ಪ್ರಯತ್ನಕ್ಕೆ ಈತನದೇ ನೂರು ತೋಳುಗಳ ಬಲ ಈ ಅನುಕಂಪದ ಅಲೆ ಕ್ಷೇತ್ರದ ಈ ತುದಿಯಿಂದ ಆ ತುದಿಯವರೆಗೂ ಕಂಡು ಬರುತ್ತದೆ. ಅದರೂ.... ಹೇಗೆ ಹೇಳುವುದು?

ಗೋವಿಂದ ಗೌಡರೊಂದಿಗೆ ಅಂಥಾ ಭಿನ್ನಾಭಿಪ್ರಾಯಗಳಿಲ್ಲದೆಯೂ ಜನತಾ ಪಕ್ಷದೊಂದಿಗೆ ನಿಂತ ಬಹು ದೊಡ್ಡ ಕಾರ್ಯಕರ್ತರ ಪಡೆ ಆ ಪಕ್ಷಕ್ಕಿದೆ. ಅಂತೆಯೇ ಅವರಿಗೊಬ್ಬ 'ಸಜ್ಜನ' ಎನ್ನಿಸಿಕೊಂಡ ಅಭ್ಯರ್ಥಿ ತಲವಾನೆ ಪ್ರಕಾಶ್. ಈ ಮೃದು ಸ್ವಭಾವದ ಹುಡುಗನ್ನ ಎಳೆತಂದು ಕಣಕ್ಕಿಳಿಸಿ ಸೋಲಿಸಿದಂತಾದೀತೆ? ಎಂಬ ಇಕ್ಕಟ್ಟು ಪಕ್ಷದವರಿಗೆ.

ಜೊತೆಗೆ ಎಲ್ಲೆಡೆ ಇರುವ ಸದ್ಭಾವನೆಯನ್ನು ಓಟುಗಳಾಗಿ ಪರಿವರ್ತಿಸಿಕೊಳ್ಳಲು "ಅಲ್ಲಿಗೆಲ್ಲ ತಲುಪಲಿಕ್ಕೇ ಆಗುತ್ತಿಲ್ಲ. ಸೌಕರ್ಯದ ಕೊರತೆ, ಹಣಕ್ಕೆ ಮುಗ್ಗಟ್ಟು." ಆದರೂ ಕಾರ್ಯಕರ್ತರಲ್ಲಿ ಆತ್ಮ ವಿಶ್ವಾಸಕ್ಕೆ ಕೊರತೆಯಿಲ್ಲ.

ರಾಮಪ್ಪಯ್ಯ ತಮ್ಮಷ್ಟಕ್ಕೆ ತಮ್ಮ ಪ್ರಯತ್ನ ಚಾಲೂ ಇಟ್ಟಿದ್ದಾರೆ. 3 ದಶಕಗಳಿಗೂ ಮಿಕ್ಕಿದ ರಾಜಕೀಯ ಅನುಭವವನ್ನು ಯಾವ ಅಬ್ಬರವಿಲ್ಲದೆ ಕೆಲಸಕ್ಕೆ ಹಚ್ಚಿದ್ದಾರೆ. ಗೆಲುವಂತೂ ತನ್ನದೇ ಎಂಬ ದೃಢ ನಂಬಿಕೆ ಅವರದು

ಸಿಪಿಐ ಏನೇನೂ ಹಣಕಾಸಿನ ಬಲವಿಲ್ಲದೆಯೂ ವ್ಯವಸ್ಥಿತವಾಗಿ ಪ್ರಚಾರ ನಡೆಸಿದೆ. ನ ರಾ ಪುರ ತಾಲ್ಲೂಕಿನ ಕಸಬಾ ಹೋಬಳಿಯಲ್ಲಿ ಪಕ್ಷದ ಸಂಘಟನೆ ಹಾಗೂ ಅದಕ್ಕೆ ಬಡ ವರ್ಗಗಳ ಬೆಂಬಲ ಸಾಕಷ್ಟು ಚೆನ್ನಾಗಿದೆ. ಜೊತೆಗೆ ಬಾಳೆಹೊನ್ನೂರು ಹೋಬಳಿ ಮತ್ತು ಕೊಪ್ಪ ತಾಲ್ಲೂಕಿನ ಕೆಲವೆಡೆ ತೋಟ ಕಾರ್ಮಿಕರ ಸಂಘಟನೆಯಿದೆ. ಮೇಲಾಗಿ ಕೊಪ್ಪ, ಶೃಂಗೇರಿ ತಾ॥ಗಳ ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು ಸಿಪಿಐ ಪರ ಶಕ್ತಿ ಮೀರಿ ಪ್ರಚಾರ ನಡೆಸಿದ್ದಾರೆ ಸದ್ಯಕ್ಕೆ ಈ ಪಕ್ಷಕ್ಕೆ ಗೆಲ್ಲುವ ಭ್ರಮೆಯಿಲ್ಲವಾದರೂ, ಲೋಕಸಭಾ ಅಭ್ಯರ್ಥಿ ಬಿ. ಕೆ. ಸುಂದರೇಶ್ ಬಗ್ಗೆ ಸ್ವಲ್ಪ ಆಸೆಯಿಟ್ಟುಕೊಂಡಿರುವುದಕ್ಕೆ ಕಾರಣ, ಎಲ್ಲೆಡೆಯೂ ಹಲವಾರು ಮತದಾರರು ತಮ್ಮಷ್ಟಕ್ಕೆ ತಾವೇ ಸುಂದರೇಶ್‌ಗೆ ಒಂದು ಓಟು ಕೊಡಬೇಕೆಂದು ನಿರ್ಧರಿಸಿರುವ, ಒಂದು ಸ್ತುತ್ಯರ್ಹವಾದ ನಿಲುವು.

ಕಣದಲ್ಲಿ ಇನ್ನುಳಿದ ಐವರು ಅಭ್ಯರ್ಥಿಗಳೂ ಅಲ್ಲಲ್ಲಿ ಪ್ರಚಾರ ನಡೆಸುತ್ತಿದ್ದಾರೆ. ಆದರೆ ಕೇವಲ ಸಾಂಕೇತಿಕ.

**ಈಗ ಮುಖ್ಯ ಪ್ರಶ್ನೆ : ಮೇಲುಗೈ ಯಾರಿಗೆ?** ಎಂಬುದು. ನಮ್ಮ ನ. 19ರ ಸಂಚಿಕೆಯಲ್ಲೇ ತಿಳಿಸಿರುವಂತೆ ಹಣಾಹಣಿ ಹೋರಾಟ ಶಾಮಣ್ಣ ಮತ್ತು ಗೋವಿಂದ ಗೌಡರ ನಡುವೆಯೇ. ಇದರಲ್ಲಿ ಮೇಲುಗೈಯ ಚಿತ್ರ ಮುಳುಗುತ್ತಿರುವ ಸೂರ್ಯ ಬಿಂಬದಂತೆ ಕ್ಷಣಕ್ಕೊಂದು ರೂಪು ಪಡೆಯುತ್ತಿದೆ. ಯಾರು ಗೆದ್ದರೂ ಕೇವಲ 500ರಿಂದ 1000 ಓಟುಗಳಿಗಿಂತ ಕಡಿಮೆ ಅಂತರವೇ ಹೊರತು ಹೆಚ್ಚಿರಲಾರದು

**ಗೋವಿಂದ ಗೌಡರೇ ಮತ್ತೆ ಗೆದ್ದು 'ಹ್ಯಾಟ್ರಿಕ್' ಹೊಡೆದರೂ ಆಶ್ಚರ್ಯವಿಲ್ಲ**

…ಗರಲ್ಲಿ—
…ನಾವಣೆ ವಿಶೇಷಾಂಕವಾಗಿ ಈ ಹೆಚ್ಚು… …ಂಚಿಕೆ ಪ್ರಕಟಿಸಿದೆ ನಮ್ಮ ಮುಂದಿನ… ನವೆಂಬರ್ 26ರ ಬದಲು, ಚುನಾ… ಮತಗಟ್ಟೆವಾರು ಮತದಾನದ… …ಯೊಂದಿಗೆ ನ. 28ರಂದು ಹೊರ ಬರ…

—ಸಂ.

## ಪುಸ್ತಕ ಗೆಲ್ಲುವ ಸ್ಪರ್ಧೆ

ಹರಿಹರಪುರ : ನೆಹರು ಜನ್ಮ ಶತಮಾನೋತ್ಸವದ ಅಂಗವಾಗಿ ನ. 10 ರಂದು ಇಲ್ಲಿನ ಕಿರಿಯ ಕಾಲೇಜಿನಲ್ಲಿ ಸಿಂಡಿಕೇಟ್ ಬ್ಯಾಂಕ್ ವತಿಯಿಂದ "…ಪುಸ್ತಕ ನಿಧಿಗೆ ಪುಸ್ತಕಗಳ… …ಪ್ರಶ್ನೆ ಸ್ಪರ್ಧೆ" ಮತ್ತು ಶಿವಮೊಗ್ಗ ಕ್ಷೇತ್ರ ಪ್ರಚಾರ ಇಲಾಖೆಯ ವತಿಯಿಂದ …ಂತರ ಕಾಲೇಜು ಚರ್ಚಾ ಸ್ಪರ್ಧೆ ನಡೆಯಿತು. ನಂತರ ಪ್ರಿನ್ಸಿಪಾಲ್ ಎಸ್ ವಿ. ಅಡಿಗರ ಅಧ್ಯಕ್ಷತೆಯಲ್ಲಿ ನಡೆದ ಬಹುಮಾನ ವಿತರಣಾ ಸಮಾರಂಭದಲ್ಲಿ ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರ್ ಮಾಧವ ಕಲ್ಲೂರ್, ಕ್ಷೇತ್ರ ಪ್ರಚಾರಾಧಿಕಾರಿ ಜಗದೀಶ್ ಮತ್ತು ಡಿ. ಸಿ ಸಿ ಬ್ಯಾಂಕ್ ಮ್ಯಾನೇಜರ್ ಸುಧಾಕರ್ ಮುಖ್ಯ ಅತಿಥಿಗಳಾಗಿದ್ದರು. (ವರದಿ : ಕೆ. ಎನ್. ಅನಿಲ್ ಕುಮಾರ್)

## ನಿಷ್ಕ್ರಿಯ/ತಟಸ್ಥ ಇಲ್ಲ : ಜನತಾ ಸ್ಪಷ್ಟನೆ

ಕೊಪ್ಪ : ಜನತಾ ಪಕ್ಷದ ಅಭ್ಯರ್ಥಿ ತಲವಾನೆ ಪ್ರಕಾಶ್ ಆಗಲಿ, ಪಕ್ಷದ ಯಾರೇ ಮುಖಂಡರಾಗಲಿ ಯಾವ ಕಾರಣಕ್ಕೂ ನಿಷ್ಕ್ರಿಯ ಅಥವಾ ತಟಸ್ಥರಾಗುವುದಿಲ್ಲ ಎಂದು ಆ ಪಕ್ಷದ ಕ್ಷೇತ್ರೀಯ ಪ್ರಚಾರ ಸಮಿತಿ ಮುಖ್ಯಸ್ಥ ಕೋಳಿ ರುದ್ರಪ್ಪ ಸ್ಪಷ್ಟಪಡಿಸಿದ್ದಾರೆ.

## ಶೃಂಗೇರಿ ಕ್ಷೇತ್ರ ಮತದಾರರ ತಾಲ್ಲೂಕುವಾರು ವಿವರ

ಕೊಪ್ಪ: ಶೃಂಗೇರಿ ವಿಧಾನಸಭಾ ಕ್ಷೇತ್ರದ ಮೂರೂ ತಾ॥ಗಳಲ್ಲಿನ ಮತದಾರರ ಸಂಖ್ಯೆಯನ್ನು ಇಲ್ಲಿ ಪ್ರತ್ಯೇಕವಾಗಿ ಕೊಟ್ಟಿದೆ. ಆವರಣದಲ್ಲಿರುವ ಅಂಕಿಗಳು ಆಯಾ ಗುಂಪಿನಲ್ಲಿ 18-21 ಪ್ರಾಯದ ಹೊಸ ಮತದಾರರವು.

**ಶೃಂಗೇರಿ ತಾ॥** : ಗಂಡಸರು 12,207 (893), ಹೆಂಗಸರು 11305 (1021), ಒಟ್ಟು 23,512; **ಕೊಪ್ಪ ತಾ॥** : 27,844 (1993), 27262 (2325) ಒಟ್ಟು 55106; **ನ. ರಾ. ಪುರ ತಾ॥** : 19364 (1266), 8576 (1456) ಒಟ್ಟು 37940. ಕ್ಷೇತ್ರದಲ್ಲಿ ಒಟ್ಟು 1,16,558 (8973)

ಜನಿಗನ ನಗಳು

### ಕಾರಂತ ಯೋಧ

ಮುಂದು ಮರ ಆಗಿತೇ ಕಾರಂತರೆನ್ನ?
ಹಿಂದು ಮರಗೂಳಿಗಳ ಮಹಾಪೂರಕ್ಕೆ
ಕಟ್ಟೆಕಟ್ಟಲ್ಲರೆ ಅವರು ಅಣೆಕಟ್ಟನ್ನ ?
ಹಳ್ಳಿ ಹಳ್ಳಿಗೆ ಒಬ್ಬ ಕಾರಂತ ಯೋಧನ
ಸೃಷ್ಟಿಸಲು ನಿಲ್ಲುವುದು ಅರಣ್ಯ ರೋದನ.

### ಜಾತ್ಯತೀತತೆ

ನಮ್ಮ ರಾಷ್ಟ್ರವು ಇಂದು ಜಾತ್ಯತೀತ
ಹೆಣ್ಣು-ಗಂಡುಗಳೆರಡೆ ನಮ್ಮಲ್ಲಿ ಜಾತಿ
ಎಲ್ಲ ಕ್ಷೇತ್ರಗಳಲ್ಲು ಒಂದೆ ಲಿಸ್ಟು—
"ಯಾವ್ಯಾವ ಜಾತಿಯದು
ಓಟು ಎಷ್ಟೆಷ್ಟು ?

### ಕ ರ್ತ ವ್ಯ

ಮತ ಹಾಕುವುದು ಅಷ್ಟೆ ನಮ್ಮ ಕರ್ತವ್ಯ
ಫಲಿತ ಮುಂದೇನೆಂದೆಲ್ಲ ಅನವಶ್ಯವಯ್ಯ
ಗೀತೆಯಲಿ ಕೃಷ್ಣನೇ ಹೇಳಿಲ್ಲವೆ—
"ಕರ್ಮಣ್ಯೇವಾಧಿಕಾರಸ್ತೇ....."?

### ಅನಿಶ್ಚಿತ

ಕಣಕಿಳಿದ ಹಣದ ಧಣಿಗಳ್ಯಾರದಲಿ
ನಿಷ್ಠೆ ಬದಲಾಯಿಸಿದ್ದು
ಉಭಯ ಸರಕಾರ ಮತದಾರ ಸಿಕ್ಕಿಬಿದ್ದು
ಪೂರ್ವ ನಿಶ್ಚಿತ ಗೆಲುವು ಡೋಲಾಯಮಾನ

— ಎಚ್. ಎಲ್. ಮಹಾಬಲ ರಾವ್

# ನೆಮ್ಮಾರಿನಲ್ಲಿ ತುಂಗಾ ನದಿಗೆ ತೂಗು ಸೇತುವೆ ಯಾವಾಗ?

ಮಾನ್ಯರೆ,

ಶೃಂಗೇರಿ ತಾಲ್ಲೂಕಿನ, ಮಲೆನಾಡಿನ ಮೂಲೆಯಲ್ಲಿರುವ ಸುಂಕದಮಕ್ಕಿ, ಯಡದಳ್ಳಿ, ಹರಿಬೆಳಲು, ಕಾರ್ಕಿ ಮುಂತಾದ ಗ್ರಾಮಾಂತರ ಪ್ರದೇಶಗಳು, ಮಳೆಗಾಲದಲ್ಲಿ ತುಂಗಾ ನದಿಯ ಪ್ರವಾಹದಿಂದಾಗಿ ಸಂಪರ್ಕ ಸಾಧನ ಇಲ್ಲದೆ ವಂಚಿತವಾಗಿವೆ. ಹಿಂದುಳಿದ ಈ ಹಳ್ಳಿಗಳ ಜನರ ಕುಂದು ಕೊರತೆಯನ್ನು ನಿವಾರಿಸಲು ತುಂಗಾ ನದಿಗೆ ಒಂದು 'ಕಾಲು ದಾರಿ ತೂಗು ಸೇತುವೆ'

## ಓದುಗರ ಪತ್ರಗಳು

ಯನ್ನು ನಿರ್ಮಿಸುವಂತೆ ಕಳೆದ 8 ವರ್ಷಗಳಿಂದ ಸತತವಾಗಿ ಸರ್ಕಾರವನ್ನು ಹಾಗೂ ಪ್ರಜಾ ಪ್ರತಿನಿಧಿಗಳನ್ನು ಶಾಸಕರನ್ನು ಒತ್ತಾಯಿಸುತ್ತಾ ಬಂದಿದ್ದೇವೆ.

ಈ ಅವಧಿಯಲ್ಲಿ 2 ಬಾರಿ ಸಾರ್ವತ್ರಿಕ ಚುನಾವಣೆಗಳು ನಡೆದಿದ್ದು ಚುನಾವಣೆ ಪ್ರಚಾರಕ್ಕಾಗಿ ವಿವಿಧ ರಾಜಕೀಯ ಪಕ್ಷಗಳ ಅಭ್ಯರ್ಥಿಗಳು ಈ ಹಳ್ಳಿಗಳಿಗೆ ಹಳ್ಳಿಯವರೇ ನಿರ್ಮಿಸಿಕೊಂಡ 'ಕಾಲು ಸಂಕ'ದಲ್ಲೇ ಭಯವನ್ನೇ ಹೊರೆಯನ್ನು ಹೊತ್ತು ನದಿಯನ್ನು ದಾಟಿ ಬಂದು, ಮತ ಯಾಚಿಸಿ ಹೋಗಿದ್ದಾರೆ ಆಯ್ಕೆಯಾದ ಅಭ್ಯರ್ಥಿಗಳು ಚುನಾವಣೆಗಳ ನಂತರ ಈ ಬಡ ಜನತೆಯ ಕುಂದು-ಕೊರತೆಗಳ ಬಗ್ಗೆ ಸ್ಪಂದಿಸದೆ, ಕಾಳಜಿ ವಹಿಸದೆ ಮೌನವಾಗಿರುವುದು ವಿಷಾದದ ಸಂಗತಿಯಾಗಿದೆ.

ಅಲ್ಲದೆ, ಹಿಂದಿನ ಚುನಾವಣೆಯಲ್ಲಿ ಭರವಸೆ ನೀಡಿ ಆಯ್ಕೆಯಾಗಿ ಪುನಃ ಮತ ಯಾಚಿಸಲು ಬರಿಗೈಯಲ್ಲಿ ಅದೇ ಕಾಲು ಸಂಕದ ಮೂಲಕ ಈ ಹಳ್ಳಿಗೆ ಬರಬೇಕಾದ ದುಃಸ್ಥಿತಿ ಅವರಿಗೆ ಬಂದಿದೆ.

ಈ ಬಾರಿ ಚುನಾವಣಾ ಪ್ರಚಾರ ಕಾರ್ಯ ಪ್ರಾರಂಭವಾಗುತ್ತಿದ್ದಂತೆ ಸುಂಕದಮಕ್ಕಿ ಗ್ರಾಮದ ಪ್ರಸನ್ನ ಯುವಕ ಸಂಘವು ಸಭೆ ಸೇರಿ ಚರ್ಚಿಸಿ, ಇಲ್ಲಿನ ಜನಸಾಮಾನ್ಯರ ಸದ್ಯದ ಕನಿಷ್ಠ ಬೇಡಿಕೆಯಾಗಿರುವ ಒಂದು ತೂಗು ಸೇತುವೆ ನಿರ್ಮಾಣದ ಬಗ್ಗೆ ಯಾವ ರಾಜಕೀಯ ಪಕ್ಷ ಸ್ಪಷ್ಟ ಜವಾಬ್ದಾರಿ ಹೊರಬಲ್ಲುದೋ ಆ ಪಕ್ಷಕ್ಕೆ ಮಾತ್ರ ಸಾಮೂಹಿಕವಾಗಿ ಮತ ನೀಡುವುದೆಂದೂ ಹಾಗಿಲ್ಲದಿದ್ದಲ್ಲಿ ಚುನಾವಣೆಯನ್ನೇ ಬಹಿಷ್ಕರಿಸತಕ್ಕದ್ದೆಂದೂ ನಿರ್ಣಯಿಸಿದೆ.

ಈ ಸಭೆಯಲ್ಲೇ 'ಕಾಲು ದಾರಿ ತೂಗು ಸೇತುವೆ' ನಿರ್ಮಾಣದ ಬಗ್ಗೆ ಒಂದು ಉಪಸಮಿತಿಯನ್ನು ರಚಿಸಲಾಯಿತಲ್ಲದೆ, **ಗ್ರಾಮಸ್ಥರ ತನು, ಮನ, ಧನ ಸಹಕಾರದಿಂದ ತೂಗು ಸೇತುವೆ ನಿರ್ಮಾಣ ಕಾರ್ಯವನ್ನು ಸ್ವತಃ ಕೈಗೊಳ್ಳಲು ನಿರ್ಣಯಿಸಿದೆ**

—ಕಾರ್ಯದರ್ಶಿ,
ಪ್ರಸನ್ನ ಯುವಕ ಸಂಘ, ಸುಂಕದಮಕ್ಕಿ,
ನೆಮ್ಮಾರು-ಶೃಂಗೇರಿ

# ಮತ ಚಲಾಯಿಸುವ ಮುನ್ನ....

ಭಾರತ ಸ್ವತಂತ್ರವಾಗಿ ಹಲವು ದಶಕಗಳು ಕಳೆದವು. ಆದರೆ ಈ ದೇಶ ಏಕೆ ಅಭಿವೃದ್ಧಿ ಹೊಂದಿಲ್ಲ? ನಮ್ಮ ದೇಶದಲ್ಲಿ ಸಂಪತ್ತಿಲ್ಲವೆ? ದುಡಿಯುವ ಕೈಗಳಿಲ್ಲವೆ? ಎಲ್ಲಾ ಇದೆ ಆದರೆ ಸುಖವಿಲಾಸಿಗಳೂ, ಐಷಾರಾಮರುಗಳೂ ಆದ ರಾಜಕಾರಣಿಗಳ ಒಂದು ವರ್ಗವೇ ಇಲ್ಲಿ ನಿರ್ಮಾಣವಾಗಿದೆ. ನಾವು ದುಡಿದ ಹಣ, ನಮ್ಮ ತೆರಿಗೆ, ನಮ್ಮದೇ ಕೆಲಸಗಳಿಗೆ ತೆಗೆದಿಟ್ಟ ಹಣ, ಹೀಗೆ ಹಲವು ಬಗೆಯಲ್ಲಿ ದೇಶದ ಸಂಪತ್ತನ್ನು ಸೂರೆಗೈಯ್ಯುತ್ತಿದ್ದಾರೆ.

ಅಬ್ಬರದ ಚುನಾವಣಾ ಪ್ರಚಾರ, ಹಣದ ವ್ಯಯ, ಹೆಂಡದ ಹಂಚಿಕೆ ನೋಡಿದರೆ ಇವರು ಅಧಿಕಾರಕ್ಕೆ ಬಂದರೆ ಖರ್ಚು ಮಾಡಿದ ನೂರರಷ್ಟು, ಸಾವಿರದಷ್ಟು ಗಳಿಸಬೇಕಲ್ಲವೆ? ಗಳಿಸಿಯೆ ಗಳಿಸುತ್ತಾರೆ. ಅದು ಯಾರದ್ದು? ನಮ್ಮ ಸಮಾಜದ ಕೆಲಸಗಳಿಗೆ ತೆಗೆದಿಟ್ಟ ಹಣವನ್ನೇ ಹೇಗೋ ಲಪಟಾಯಿಸುತ್ತಾರೆ. ಹಾಗಾದರೆ ಈ ದೇಶ ಎಂದು ಅಭಿವೃದ್ಧಿ ಹೊಂದೀತು?

ಎಲ್ಲಾ ಅರಿತ ನಾವು ಯೋಚಿಸಬೇಕು. ಸ್ಪರ್ಧಿಸಿದ ಪ್ರತಿಯೊಬ್ಬ ಅಭ್ಯರ್ಥಿಯ ಹಾಗೂ ಅವರ ಹಿಂಬಾಲಕರ ಬಗ್ಗೆ ಯೋಚಿಸಿ, ಯಾರು ಉತ್ತಮ; ಯಾರಿಗೆ ನಾವು ಮತ ಚಲಾಯಿಸಬಹುದು ಎಂದು ಯೋಚಿಸಿ, ತಮ್ಮ ಮತ ವ್ಯರ್ಥವಾಗದಂತೆ ಚಲಾಯಿಸಬೇಕು. ಈ ನಮ್ಮ ಮತ ದೇಶಕ್ಕೂ ನಮಗೂ ನಮ್ಮ ಮುಂದಿನ ಪೀಳಿಗೆಗೂ ಭದ್ರ ಬುನಾದಿ. ಒತ್ತಾಯ, ಬೆದರಿಕೆ, ಬಲಾತ್ಕಾರಗಳಿಂದ ಮತ ಚಲಾಯಿಸಿದರೆ ನಮ್ಮ ಸಮಾಧಿಯನ್ನು ನಾವೇ ನಿರ್ಮಿಸಿಕೊಂಡಂತೆ. ನಾವು ನೀಡಿದ ಮತ ಈ ದೇಶ ಮುಂದಿನ 5 ವರ್ಷಗಳಲ್ಲಿ ಯಾವ ಹಾದಿಯಲ್ಲಿ ಸಾಗಬಹುದು ಎಂಬುದನ್ನು ಸೂಚಿಸುತ್ತದೆ.

ಶಾಂತವಾಗಿ ಒಂದು ಗಳಿಗೆ ಕುಳಿತು ಯೋಚಿಸಿ ನಿರ್ಧರಿಸಿ ಮತ ಚಲಾಯಿಸಿ.

—ಸುಧಾಕರ್, ಮುಡುಮುಡಿ

# ನೆಹರು ಜನ್ಮಶತಾಬ್ದಿ, ಮಕ್ಕಳ ದಿನಾಚರಣೆ

**ಬಸರಿಕಟ್ಟೆ**

ನೆಹರು ಜನ್ಮ ಶತಾಬ್ದಿ ಮತ್ತು ಮಕ್ಕಳ ದಿನಾಚರಣೆಯನ್ನು ಸ್ಥಳೀಯ ಸಿಂಡಿಕೇಟ್ ಬ್ಯಾಂಕ್ ಮತ್ತು ಸದ್ಗುರು ಪ್ರೌಢಶಾಲೆಯ ಸಹಯೋಗದೊಂದಿಗೆ ಆಚರಿಸಲಾಯಿತು. ಹಿರಿಯ ಪ್ರಾಥಮಿಕ ಶಾಲೆ ಹಾಗೂ ಅಂಗನವಾಡಿ ಮಕ್ಕಳಿಗಾಗಿ ವಿವಿಧ ಮನರಂಜನಾ ಹಾಗೂ ಆಟೋಟ ಸ್ಪರ್ಧೆಗಳನ್ನು ಏರ್ಪಡಿಸಲಾಯಿತು. ಕಾರ್ಯಕ್ರಮಗಳನ್ನೆಲ್ಲ ವಿವಿಧ ಪ್ರೌಢ ಶಾಲೆಗಳ ಮಕ್ಕಳೇ ನಿರ್ವಹಿಸಿದರು. ಮಕ್ಕಳಿಗೆಲ್ಲಾ ತೋಟದೂರು ಶಾಮಣ್ಣನವರು ಸಿಹಿ ಹಂಚಿದರು.

**ಹರಿಹರಪುರ**

ತಾ। ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಇಲ್ಲಿನ ರೋಟರಿ ಗ್ರಾಮೀಣ ದಳ, ಹಿ. ಪ್ರಾ. ಶಾಲೆಗಳು, ಕಿರಿಯ ಕಾಲೇಜು ಮತ್ತು ರಾಷ್ಟ್ರೋತ್ಥಾನ ಪರಿಷತ್ ಆಶ್ರಯದಲ್ಲಿ ಕನ್ನಡ ರಾಜ್ಯೋತ್ಸವ ಮತ್ತು ನೆಹರು ಜನ್ಮ ಶತಾಬ್ದಿ ಆಚರಣೆ ನ 14 ರಂದು ನಡೆದವು. ವಿವಿಧ ವೇಷ ಭೂಷಣಗಳು ಮತ್ತು ಸ್ತಬ್ಧ ಚಿತ್ರಗಳೊಂದಿಗೆ ಆಕರ್ಷಕ ರಾಜ್ಯೋತ್ಸವ ಮೆರವಣಿಗೆ ನಡೆಯಿತು.

ಕನ್ನಡ ಸಾಹಿತ್ಯ ಪರಿಷತ್ತಿನ ತಾ॥ ಪ್ರತಿನಿಧಿಯಾಗಿ ರಾಜ್ಯ ಮಟ್ಟದಲ್ಲೇ ಅದ್ವಿತೀಯವಾದ ಮತ್ತು ಸ್ಮರಣೀಯ ಕೆಲಸ ಮಾಡಿರುವ ಹ. ಪ. ಗಣಪತಿ ಪ್ರಭುಗಳನ್ನು ಅವರ ಬಾಲ್ಯ ಸ್ನೇಹಿತ ನುಗ್ಗಿಮಕ್ಕಿ ವೆಂಕಟಕೃಷ್ಣಪ್ಪ ಶಾಲು ಹೊದಿಸಿ ಸನ್ಮಾನಿಸಿದರು ಎ ಆರ್. ಜಯಪ್ರಕಾಶ್ ಅಧ್ಯಕ್ಷತೆ ವಹಿಸಿದ್ದು, ಎಸ್. ವಿ. ಅಡಿಗ ಮತ್ತು ಬಿ. ಎಂ. ಕಲ್ಲೂರ್ ಮುಖ್ಯ ಅತಿಥಿಗಳಾಗಿದ್ದರು. ವಿವಿಧ ಸ್ಪರ್ಧೆಗಳು ನಡೆದವು.

**ಶೃಂಗೇರಿ ಕೆನರಾ ಬ್ಯಾಂಕ್**

ನೆಹರು ಜನ್ಮ ಶತಾಬ್ದಿ ಅಂಗವಾಗಿ ನ. 12 ರಂದು ಮಹಿಳೆಯರು, ಹೆಣ್ಣು ಮಕ್ಕಳು ಮತ್ತು ಶಿಶುವಿಹಾರದ ಮಕ್ಕಳಿಗಾಗಿ ವಿವಿಧ ಸಾಂಸ್ಕೃತಿಕ ಮತ್ತು ಕ್ರೀಡಾ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. 300 ಕ್ಕೂ ಹೆಚ್ಚು ಸ್ಪರ್ಧಿಗಳು ಭಾಗವಹಿಸಿದ್ದರು. ತಹಸೀಲ್ದಾರ್ ಟಿ. ಆರ್. ಬೋರೇಗೌಡರ ಅಧ್ಯಕ್ಷತೆಯಲ್ಲಿ ಸಮಾರೋಪ ಸಮಾರಂಭ ನಡೆಯಿತು. ಮಹಿಳಾ ಸಮಾಜದ ಅಧ್ಯಕ್ಷೆ ಶೈಲಾ ರತ್ನಾಕರ ಹೆಗ್ಡೆ, ಶಾಖಾಧಿಕಾರಿ ಜ. ಎ. ಬಿ ಕಾಮತ್ ಅತಿಥಿಗಳಾಗಿದ್ದರು.

**ವೈಕುಂಠಪುರ**

ನ. 14ರಂದು ಮಕ್ಕಳ ದಿನಾಚರಣೆಯ ಅಂಗವಾಗಿ ವೈಕುಂಠಪುರ ಶಾಲೆಯಲ್ಲಿ ವಿದ್ಯಾರ್ಥಿಗಳಿಗಾಗಿ ವಿವಿಧ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ಭಾವಗೀತೆ, ಜನಪದ ಗೀತೆ, ರಾಷ್ಟ್ರ ನಾಯಕರ ಬಗ್ಗೆ ಭಾಷಣ, ಆಶುಭಾಷಣ ಸ್ಪರ್ಧೆ ಮತ್ತು ಪ್ರಾಥಮಿಕ ತರಗತಿಗಳಿಗಳಿಗಾಗಿ ಕಂಠಪಾಠ ಸ್ಪರ್ಧೆಗಳನ್ನು ನಡೆಸಲಾಯಿತು.

ವಿಜೇತರಾದವರಿಗೆ 'ಸಮುದಾಯ' ಸ್ನೇಹಿತರು ಎಲ್ಲಾ ಸ್ಪರ್ಧೆಗೂ ಪ್ರಥಮ, ದ್ವಿತೀಯ ಮತ್ತು ಭಾಗವಹಿಸಿದ ಎಲ್ಲರಿಗೂ ಪ್ರೋತ್ಸಾಹಕ ಬಹುಮಾನಗಳನ್ನು ನೀಡಿದರು (ವರದಿ: ವೈ.ಗ. ಜಗದೀಶ್)

**ಜಿಲ್ಲಾ ಪರಿಷತ್, ಚಿಕ್ಕಮಗಳೂರು : ಆರೋಗ್ಯ ಇಲಾಖೆ**

ಸಂ. ಡಿಹೆಚ್ ಇ/75/89-90

ಜಿಲ್ಲಾ ಆರೋಗ್ಯ ಮತ್ತು ಕುಟುಂಬ
ಕಲ್ಯಾಣಾಧಿಕಾರಿಗಳ ಕಛೇರಿ
ಚಿಕ್ಕಮಗಳೂರು, ದಿನಾಂಕ: 2-11-89

# ಮುಂಜಾಗ್ರತಾ ಕ್ರಮ

ಮಕ್ಕಳಲ್ಲಿ ಸಾಮಾನ್ಯವಾಗಿ ಬರತಕ್ಕ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ನಿಮ್ಮ ಮಗುವಿಗೆ ಒಂದು ವರ್ಷ ತುಂಬುವುದರೊಳಗಾಗಿ ರೋಗ ನಿರೋಧಕ ಚುಚ್ಚುಮದ್ದನ್ನು ತಪ್ಪದೆ ಹಾಕಿಸಿ.

1. ಮಗು ಹುಟ್ಟಿದ ಎರಡೂವರೆ ತಿಂಗಳಿಂದ 12 ತಿಂಗಳೊಳಗೆ ಬಿ. ಸಿ. ಜಿ. ಚುಚ್ಚುಮದ್ದು ಕೊಡಿಸಿದರೆ **ಕ್ಷಯರೋಗ** ವನ್ನು ತಡೆಗಟ್ಟಬಹುದು.
2. ಮಗುವಿಗೆ ಒಂದು ವರ್ಷ ತುಂಬುವುದರೊಳಗೆ ಡಿ. ಪಿ ಟಿ. (ತ್ರಿರೋಗ ನಿರೋಧಕ) ಚುಚ್ಚುಮದ್ದನ್ನು ಆರು ವಾರಗಳ ಅಂತರದಲ್ಲಿ ಮೂರು ಬಾರಿ ಕೊಡಿಸಿದರೆ, **ಗಂಟಲು ಮಾರಿ, ನಾಯಿ ಕೆಮ್ಮು**, ಮತ್ತು **ಧನುರ್ವಾತ**ವನ್ನು ತಡೆಗಟ್ಟಬಹುದು.
3. ಡಿ. ಪಿ. ಟಿ. ಚುಚ್ಚುಮದ್ದಿನ ಜೊತೆಯಲ್ಲಿ ಅದೇ ಆರು ವಾರಗಳ ಅಂತರದಲ್ಲಿ ಮೂರು ಬಾರಿ ಪೋಲಿಯೋ ಡ್ರಾಪ್ಸ್ ಹಾಕಿಸಿದಗೆ, ನರಮಜ್ಜ ರೋಗ (**ಪೋಲಿಯೋ**) ಬರುವುದನ್ನು ತಡೆಗಟ್ಟಬಹುದು.
4. ಮಗುವಿಗೆ 9 ತಿಂಗಳಾದ ನಂತರ 12 ತಿಂಗಳೊಳಗೆ, ತಪ್ಪದೆ ದಡಾರ ಲಸಿಕೆಯನ್ನು ಕೊಡಿಸುವುದರಿಂದ **ದಡಾರ** ಬರುವುದನ್ನು ತಪ್ಪಿಸಬಹುದು.

ಮಕ್ಕಳಲ್ಲಿ ಬರಬಹುದಾದ ಈ ಆರು ಮಾರಕ ರೋಗಗಳ ವಿರುದ್ಧ ಮೇಲ್ಕಂಡ ಚುಚ್ಚುಮದ್ದು ಕೊಡಿಸುವುದನ್ನು ಯಾವ ಕಾರಣಕ್ಕೂ ಮುಂದೂಡದೆ ಇಂದೇ ನಿರ್ಧರಿಸಿ. ಹೆಚ್ಚಿನ ಮಾಹಿತಿಗೆ ನಿಮ್ಮ ಸಮೀಪದ ಆರೋಗ್ಯ ಕಾರ್ಯಕರ್ತರನ್ನಾಗಲಿ, ಆಸ್ಪತ್ರೆಗಾಗಲಿ ಇಂದೇ ಭೇಟಿ ಕೊಡಿ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಅಧಿಕಾರಿಗಳು, ಚಿಕ್ಕಮಗಳೂರು

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚು ಕೂಟ, ಕೊಪ್ಪ.